## ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1143 |
| ಸದಸ್ಯರ ಹೆಸರು | : | ಶ್ರೀ ಕೆ.ಎ ತಿಪ್ಪೇಸ್ವಾಮಿ (ನಾಮ ನಿರ್ದೇಶನ ಹೊಂದಿದವರು) |
| ಉತ್ತರಿಸುವ ದಿನಾಂಕ | : | 23.12.2021 |
| ಉತ್ತರಿಸುವ ಸಚಿವರು | : | ಮಾನ್ಯ ಜಲಸಂಪನ್ಮೂಲ ಸಚಿವರು |

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕೊಪ್ಪಳ ಜಿಲ್ಲೆಯ ನವಲಿ ಬಳಿ ತುಂಗಭದ್ರಾ ಜಲಾಶಯದಲ್ಲಿ ಹೂಳು ತುಂಬಿ ನೀರಿನ ಸಂಗ್ರಹಣೆಯಲ್ಲಿ ಉಂಟಾಗಿರುವ ಕೊರತೆಯನ್ನು ಸರಿದೂಗಿಸಲು ನಿರ್ಮಿಸಲು ಉದ್ದೇಶಿಸಿರುವ ಸಮಾನಾಂತರ ಜಲಾಶಯ ನಿರ್ಮಾಣ ಅನುಷ್ಠಾನದ ಯೋಜನೆ ಯಾವ ಹಂತದಲ್ಲಿದೆ. (ಸಂಪೂರ್ಣ ಮಾಹಿತಿ ನೀಡುವುದು) | ತುಂಗಭದ್ರಾ ಆಣೆಕಟ್ಟೆಯಲ್ಲಿ ಹೂಳು ತುಂಬಿರುವುದರಿಂದ, ಸದರಿ ಡ್ಯಾಂಗೆ ಪರ್ಯಾಯವಾಗಿ ಕೊಪ್ಪಳ ಜಿಲ್ಲೆಯ ನವಲಿ ಹತ್ತಿರ ಸಮತೋಲನಾ ಜಲಾಶಯವನ್ನು ನಿರ್ಮಿಸುವ ಸಲುವಾಗಿ ಸರ್ವೆ ಸಮೀಕ್ಷೆ ಕೈಗೊಳ್ಳಲು ರೂ.14.30 ಕೋಟಿಗಳ ಮೊತ್ತದ ಅಂದಾಜಿಗೆ ದಿನಾಂಕ:16.05.2020 ರಂದು ಆಡಳಿತಾತ್ಮಕ ಅನುಮೋದನೆಯನ್ನು ನೀಡಲಾಗಿದೆ. ಸದರಿ ಯೋಜನೆಯ ಸರ್ವೆ ಕನ್ಸಲ್ಟೆನ್ಸಿ ಕಾಮಗಾರಿಯ ಟೆಂಡರ್ ಪ್ರಕ್ರಿಯೆ ಅಂತಿಮಗೊಂಡಿದ್ದು, ಸರ್ವೆ ಕಾರ್ಯ ಪ್ರಗತಿಯಲ್ಲಿರುತ್ತದೆ. |
| ಆ) | ರಾಜ್ಯ ಸರ್ಕಾರ ಈ ಸಮಾನಾಂತರ ಜಲಾಶಯ ನಿರ್ಮಾಣದ ಬಗ್ಗೆ ನೆರೆ ರಾಜ್ಯಗಳಾದ ಆಂಧ್ರಪ್ರದೇಶ ಮತ್ತು ತೆಲಂಗಾಣ ರಾಜ್ಯಗಳೊಂದಿಗೆ ಸಮಾಲೋಚಿಸಿ, ಆ ರಾಜ್ಯಗಳ ಸಹಮತಿ ಪಡೆಯಲಾಗಿದೆಯೆ; ಈ ಯೋಜನಾ ಅನುಷ್ಠಾನ ಅಂದಾಜು ಮೊತ್ತವೆಷ್ಟು; ಈ ಅಂದಾಜು ಮೊತ್ತವನ್ನು ಸಂಬಂಧಿಸಿದ ಮೂರು ರಾಜ್ಯಗಳು ಯಾವ ಅನುಪಾತದಲ್ಲಿ ಭರಿಸಲು ಸಹಮತಿಸಿವೆ; (ಸಂಪೂರ್ಣ ಮಾಹಿತಿ ನೀಡುವುದು) | ಸಮಾನಾಂತರ ಜಲಾಶಯ ನಿರ್ಮಾಣದ ಕುರಿತು ನೆರೆ ರಾಜ್ಯಗಳಾದ ಆಂಧ್ರಪ್ರದೇಶ ಮತ್ತು ತೆಲಂಗಾಣ ರಾಜ್ಯಗಳೊಂದಿಗೆ ಸಮಾಲೋಚಿಸಿ, ಆ ರಾಜ್ಯಗಳ ಸಹಮತಿ ಪಡೆಯುವ ನಿಟ್ಟಿನಲ್ಲಿ, ಸದರಿ ಪ್ರಸ್ತಾವನೆಯನ್ನು ತುಂಗಭದ್ರಾ ಮಂಡಳಿಯ ಮುಂದೆ ಮಂಡಿಸಲಾಗಿದ್ದು, ಪ್ರಸ್ತಾವನೆಯು ಮಂಡಳಿಯ ಪರಿಶೀಲನೆಯಲ್ಲಿರುತ್ತದೆ. ಸದರಿ ಯೋಜನೆಯ ಸರ್ವೆ ಪ್ರಕ್ರಿಯೆ ಮುಗಿದ ನಂತರ ಅಂದಾಜು ಮೊತ್ತದ ಹಾಗೂ ಇತರೆ ವಿವರಗಳ ಕುರಿತು ಸ್ಪಷ್ಟವಾದ ಮಾಹಿತಿ ಲಭ್ಯವಾಗಲಿದೆ. |
| ಇ) | ರಾಜ್ಯ ಸರ್ಕಾರ ಇದೇ ರೀತಿ ರಾಜ್ಯದಲ್ಲಿನ 58 ಅಣೆಕಟ್ಟಗಳನ್ನು ವಿಶ್ವ ಬ್ಯಾಂಕ್ ನೆರವಿನ ಡ್ರಿಪ್ (DRIP) ಯೋಜನೆಯಡಿ 1500 ಕೋಟಿ ರೂ. ಅಂದಾಜು ಮೊತ್ತದಲ್ಲಿ ಪುನಶ್ಚೇತನ ಮತ್ತು ಅಭಿವೃದ್ಧಿಯನ್ನು ಕೈಗೊಳ್ಳುವುದಾಗಿ 2020-21ರ ಆಯ-ವ್ಯಯದಲ್ಲಿ ಪ್ರಸ್ತಾಪಿಸಿದ್ದು, ಈ ಯೋಜನೆ ಅನುಷ್ಠಾನ ಯಾವ ಹಂತದಲ್ಲಿದೆ; (ಗುರುತಿಸಿರುವ 58 ಅಣೆಕಟ್ಟುಗಳು ಒಳಗೊಂಡಂತೆ ಸಂಪೂರ್ಣ ಮಾಹಿತಿ ನೀಡುವುದು) | ವಿಶ್ವಬ್ಯಾಂಕ್ ನೆರವಿನ ಡ್ರಿಪ್ (DRIP) ಹಂತ-2 ಮತ್ತು 3 ರಡಿ ಜಲಸಂಪನ್ಮೂಲ ಇಲಾಖೆಯ 58 ಅಣೆಕಟ್ಟುಗಳ ಪುನಶ್ಚೇತನ ಮತ್ತು ಅಭಿವೃದ್ಧಿ ಕಾಮಗಾರಿಗಳನ್ನು ರೂ.1500.00 ಕೋಟಿ ಅಂದಾಜು ಮೊತ್ತದಲ್ಲಿ ಕೈಗೊಳ್ಳಲು ಅನುಮೋದನೆಯನ್ನು ನೀಡಲಾಗಿದೆ.<br>ಸದರಿ ಯೋಜನೆಗೆ ಸಂಬಂಧಿಸಿದಂತೆ, ಈವರೆಗೆ 08 ಅಣೆಕಟ್ಟುಗಳ (ಕೃಷ್ಣರಾಜ ಸಾಗರ, ಗಾಯಿತ್ರಿ, ತುಂಗಭದ್ರ, ನಾರಾಯಣಪುರ, ಆಲಮಟ್ಟಿ, ಹೇಮಾವತಿ, ವೋಟೆಹೊಳೆ ಮತ್ತು ತಾರಕ) ಅಂದಾಜು ಪಟಿ (Project Screening templates) ಗಳಿಗೆ ಕೇಂದ್ರ ಜಲ ಆಯೋಗವು ನಿರಾಕ್ಷೇಪಣಾ (NOL) ಪತ್ರವನ್ನು ನೀಡಿರುತ್ತದೆ, ಅದರಲ್ಲಿ 02 ಅಣೆಕಟ್ಟುಗಳ (ಕೆ.ಆರ್.ಎಸ್ ಮತ್ತು ಗಾಯಿತ್ರಿ) ಟೆಂಡರ್ ಪ್ರಕ್ರಿಯೆ ಚಾಲ್ತಿಯಲ್ಲಿರುತ್ತದೆ. ಉಳಿದ 50 ಅಣೆಕಟ್ಟುಗಳ ಅಂದಾಜು ಪಟ್ಟಿಗಳು ತಯಾರಿಕಾ ಹಂತದಲ್ಲಿದೆ. 58 ಅಣೆಕಟ್ಟುಗಳ ವಿವರಗಳನ್ನು ಅನುಬಂಧದಲ್ಲಿ ನೀಡಲಾಗಿದೆ. |

ಸಂಖ್ಯೆ: ಜಸಂಇ 259 ಎಂಎಲ್ಎ 2021

(ಗೋವಿಂದ ಎಂ.ಕಾರಜೋಳ)
ಜಲಸಂಪನ್ಮೂಲ ಸಚಿವರು

ವಿಧಾನ ಪರಿಷತ್ತಿನ ಸದಸ್ಯರಾದ ಮಾನ್ಯಶ್ರೀ ಕೆ.ಎ ತಿಪ್ಪೇಸ್ವಾಮಿ (ನಾಮನಿರ್ದೇಶನ ಹೊಂದಿದವರು) ಇವರ ಪ್ರಶ್ನೆ ಸಂಖ್ಯೆ: 1143 ಕ್ಕೆ ಅನುಬಂಧ

| ಕ್ರಮ ಸಂಖ್ಯೆ | ಅಣೆಕಟ್ಟಿನ ಹೆಸರು | ಅಂದಾಜು ಮೊತ್ತ (ರೂ. ಕೋಟಿಗಳಲ್ಲಿ) |
|---|---|---|
| ಡ್ರಿಪ್ ಹಂತ-2 ಮತ್ತು ಹಂತ-3 ರಲ್ಲಿ ಹೊಸದಾಗಿ ಕೈಗೆತ್ತಿಕೊಳ್ಳಲಾದ ಅಣೆಕಟ್ಟುಗಳು | | |
| 1 | ತಾರಕ ಅಣೆಕಟ್ಟು | 9.98 |
| 2 | ನುಗು ಅಣೆಕಟ್ಟು | 16.05 |
| 3 | ಮಂಚನಬೆಲೆ ಅಣೆಕಟ್ಟು | 23.00 |
| 4 | ಇಗ್ಗಲೂರು ಅಣೆಕಟ್ಟು | 10.00 |
| 5 | ಕಣ್ವ ಅಣೆಕಟ್ಟು | 4.45 |
| 6 | ಸುವರ್ಣಾವತಿ ಅಣೆಕಟ್ಟು | 21.85 |
| 7 | ಹೆಬ್ಬಹಳ್ಳ ಅಣೆಕಟ್ಟು | 8.30 |
| 8 | ಗುಂಡಾಲ್ ಅಣೆಕಟ್ಟು | 3.72 |
| 9 | ಅರ್ಕಾವತಿ ಅಣೆಕಟ್ಟು | 10.76 |
| 10 | ಉಡುತೊರೆಹಳ್ಳ ಅಣೆಕಟ್ಟು | 3.93 |
| 11 | ಮಾರ್ಕೊನಹಳ್ಳಿ ಅಣೆಕಟ್ಟು | 3.73 |
| 12 | ಮಂಗಳ ಅಣೆಕಟ್ಟು | 2.00 |
| 13 | ಮುತ್ತುರಾಯನಕೆರೆ | 1.30 |
| 14 | ಕೆ ಹೊನ್ನಮಾಚನಹಳ್ಳಿ ಕೆರೆ | 1.30 |
| 15 | ತೀತಾ ಅಣೆಕಟ್ಟು | 6.73 |
| 16 | ಯಗಚಿ ಅಣೆಕಟ್ಟು | 7.00 |
| 17 | ತೊಣ್ಣೂರು ಅಣೆಕಟ್ಟು | 9.75 |
| 18 | ಗಂಡೋರಿನಾಲಾ ಯೋಜನೆ | 24.60 |
| 19 | ಭೀಮಾ ಯೋಜನೆ | 14.20 |
| 20 | ಸೌದಾಗರ ಯೋಜನೆ | 6.80 |
| 21 | ಚುಳಕಿನಾಲಾ ಯೋಜನೆ | 9.47 |
| 22 | ಅರೆಬೆಂಚಿ ಅಣೆಕಟ್ಟು | 18.00 |
| 23 | ಹರಿನಾಲಾ ಅಣೆಕಟ್ಟು | 8.35 |
| 24 | ಧರ್ಮ ಜಲಾಶಯ | 4.90 |
| 25 | ಮದಗಮಾಸೂರು ಅಣೆಕಟ್ಟು | 6.40 |
| 26 | ತುಂಗ ಮೇಲ್ದಂಡೆ ಯೋಜನೆ | 5.80 |
| 27 | ಐಹೊಳೆ ಅಣೆಕಟ್ಟು | 4.30 |
| 28 | ಅಂಜನಾಪುರ ಅಣೆಕಟ್ಟು | 7.95 |
| 29 | ಅಂಬ್ಲಿಗೊಲಾ ಅಣೆಕಟ್ಟು | 5.65 |
| 30 | ತುಂಗಭದ್ರ ಅಣೇಕಟ್ಟು | 39.01 |
| 31 | ಹಿರೇಹಳ್ಳ ಅಣೆಕಟ್ಟು | 6.85 |
| 32 | ನಾರಿಹಳ್ಳ ಅಣೆಕಟ್ಟು | 5.55 |
| 33 | ವಾಣಿವಿಲಾಸ ಸಾಗರ ಅಣೆಕಟ್ಟು | 2.00 |

ವಿಧಾನ ಪರಿಷತ್ತಿನ ಸದಸ್ಯರಾದ ಮಾನ್ಯಶ್ರೀ ಕೆ.ಎ ತಿಪ್ಪೇಸ್ವಾಮಿ (ನಾಮನಿರ್ದೇಶನ ಹೊಂದಿದವರು) ಇವರ ಪ್ರಶ್ನೆ ಸಂಖ್ಯೆ: 1143 ಕ್ಕೆ ಅನುಬಂಧ

| ಕ್ರಮ ಸಂಖ್ಯೆ | ಅಣೆಕಟ್ಟಿನ ಹೆಸರು | ಅಂದಾಜು ಮೊತ್ತ (ರೂ. ಕೋಟಿಗಳಲ್ಲಿ) |
|---|---|---|
| | **ಡ್ರಿಪ್ ಹಂತ-2 ಮತ್ತು ಹಂತ-3 ರಲ್ಲಿ ಹೊಸದಾಗಿ ಕೈಗೆತ್ತಿಕೊಳ್ಳಲಾದ ಅಣೆಕಟ್ಟುಗಳು** | |
| 1 | ತಾರಕ ಅಣೆಕಟ್ಟು | 9.98 |
| 2 | ನುಗು ಅಣೆಕಟ್ಟು | 16.05 |
| 3 | ಮಂಚನಬೆಲೆ ಅಣೆಕಟ್ಟು | 23.00 |
| 4 | ಇಗ್ಗಲೂರು ಅಣೆಕಟ್ಟು | 10.00 |
| 5 | ಕಣ್ವ ಅಣೆಕಟ್ಟು | 4.45 |
| 6 | ಸುವರ್ಣಾವತಿ ಅಣೆಕಟ್ಟು | 21.85 |
| 7 | ಹೆಬ್ಬಹಳ್ಳ ಅಣೆಕಟ್ಟು | 8.30 |
| 8 | ಗುಂಡಾಲ್ ಅಣೆಕಟ್ಟು | 3.72 |
| 9 | ಅರ್ಕಾವತಿ ಅಣೆಕಟ್ಟು | 10.76 |
| 10 | ಉಡುತೊರೆಹಳ್ಳ ಅಣೆಕಟ್ಟು | 3.93 |
| 11 | ಮಾರ್ಕೋನಹಳ್ಳಿ ಅಣೆಕಟ್ಟು | 3.73 |
| 12 | ಮಂಗಳ ಅಣೆಕಟ್ಟು | 2.00 |
| 13 | ಮುತ್ತುರಾಯನಕೆರೆ | 1.30 |
| 14 | ಕೆ ಹೊನ್ನಮಾಚನಹಳ್ಳಿ ಕೆರೆ | 1.30 |
| 15 | ತೀತಾ ಅಣೆಕಟ್ಟು | 6.73 |
| 16 | ಯಗಚಿ ಅಣೆಕಟ್ಟು | 7.00 |
| 17 | ತೊಣ್ಣೂರು ಅಣೆಕಟ್ಟು | 9.75 |
| 18 | ಗಂಡೋರಿನಾಲಾ ಯೋಜನೆ | 24.60 |
| 19 | ಭೀಮಾ ಯೋಜನೆ | 14.20 |
| 20 | ಸೌದಾಗರ ಯೋಜನೆ | 6.80 |
| 21 | ಚುಳಕಿನಾಲಾ ಯೋಜನೆ | 9.47 |
| 22 | ಅರೆಬೆಂಚಿ ಅಣೆಕಟ್ಟು | 18.00 |
| 23 | ಹರಿನಾಲಾ ಅಣೆಕಟ್ಟು | 8.35 |
| 24 | ಧರ್ಮ ಜಲಾಶಯ | 4.90 |
| 25 | ಮದಗಮಾಸೂರು ಅಣೆಕಟ್ಟು | 6.40 |
| 26 | ತುಂಗ ಮೇಲ್ದಂಡೆ ಯೋಜನೆ | 5.80 |
| 27 | ಐಹೊಳೆ ಅಣೆಕಟ್ಟು | 4.30 |
| 28 | ಅಂಜನಾಪುರ ಅಣೆಕಟ್ಟು | 7.95 |
| 29 | ಅಂಬ್ಲಿಗೊಲಾ ಅಣೆಕಟ್ಟು | 5.65 |
| 30 | ತುಂಗಭದ್ರ ಅಣೇಕಟ್ಟು | 39.01 |
| 31 | ಹಿರೇಹಳ್ಳ ಅಣೆಕಟ್ಟು | 6.85 |
| 32 | ನಾರಿಹಳ್ಳ ಅಣೆಕಟ್ಟು | 5.55 |
| 33 | ವಾಣಿವಿಲಾಸ ಸಾಗರ ಅಣೆಕಟ್ಟು | 2.00 |